**ಬಿ.ಎಸ್. ರಾಮಭಟ್ಟ***

# ಕೊಪ್ಪಲುಮಠ ಮತ್ತು ಬಿದನೂರಿನ ಅರಸೊತ್ತಿಗೆಯ ಗದ್ದುಗೆಗಳು

ಇಕ್ಕೇರಿಯು ಹಾಳಾದ ನಂತರ ಕ್ರಿ. ಶ. ಸು. ೧೬೩೯ರಲ್ಲಿ ವೀರಭದ್ರನಾಯಕನು ಬಿದನೂರನ್ನು ರಾಜಧಾನಿಯನ್ನಾಗಿ ಮಾಡಿಕೊಂಡನು. ಇದು ಸು. ೧೨೫ ವರ್ಷಗಳ ಕಾಲ ಕೆಳದಿ ಸಂಸ್ಥಾನದ ಮೂರನೆಯ ರಾಜಧಾನಿಯಾಗಿತ್ತು. ವೀರಭದ್ರ ನಾಯಕನು ಸೇರಿದಂತೆ ಇಲ್ಲಿ ಒಂಬತ್ತು ರಾಜರು ಮತ್ತು ಇಬ್ಬರು ರಾಣಿಯರು ಆಳಿದರು.

ಹಿಂದಿನ ಅರಸೊತ್ತಿಗೆಯ ಕಾಲದಲ್ಲಿ ರಾಜ-ರಾಣಿಯರ ಸಮಾಧಿಗಳಿಗಾಗಿ ಒಂದು ಪ್ರತ್ಯೇಕ ಸ್ಥಳವನ್ನು ಮೀಸಲಿಡುತ್ತಿದ್ದರು. ಕೆಳದಿ ಸಂಸ್ಥಾನದ ಕಾಲದಲ್ಲಿ ಇಂತಹ ಸ್ಥಳವನ್ನು 'ಕೊಪ್ಪಲು' ಎಂದು ಕರೆಯುತ್ತಿದ್ದರು. ಇದು ಒಂದು ವೀರಶೈವ ಮಠಕ್ಕೆ ಹೊಂದಿಕೊಂಡಿರುವುದು ಗಮನಾರ್ಹವಾಗಿದೆ. ಆದುದರಿಂದ ಇದನ್ನು 'ಕೊಪ್ಪಲುಮಠ' ಎಂದು ಕರೆದರು. ಇಕ್ಕೇರಿ ಮತ್ತು ಬಿದನೂರಿನಲ್ಲಿ ಮರಣ ಹೊಂದಿದ ರಾಜರಾಣಿಯರನ್ನು ಕೊಪ್ಪಲುಮಠದಲ್ಲಿ ಸಮಾಧಿ ಮಾಡಲಾಯಿತೆಂದು ಗ್ರಂಥಗಳಲ್ಲಿ ಹೇಳಿದೆ. ಬಿದನೂರಿನಲ್ಲಿ ಅಲ್ಲದೆ ಇಕ್ಕೇರಿಯಲ್ಲೂ ಕೊಪ್ಪಲುಮಠವಿದೆ. ಸಾಮಾನ್ಯ ಅರ್ಥದಲ್ಲಿ ಕೊಪ್ಪಲು ಎಂದರೆ ಒಂದು ಉಪ ಗ್ರಾಮ. ಗ್ರಾಮಕ್ಕೆ ಸೇರಿದ ಕೆಲವೇ ಮನೆಗಳ ಗುಂಪು ಎಂದು ಅರ್ಥ ; ಎಲ್ಲಾ ಕೊಪ್ಪಲುಗಳಲ್ಲಿ ಸಮಾಧಿ ಅಥವಾ ಗದ್ದುಗೆಗಳಿರಬೇಕೆಂಬ ನಿಯಮವಿಲ್ಲ.

ಬಿದನೂರಿನಲ್ಲಿ ಎರಡು ಕೊಪ್ಪಲುಮಠಗಳಿವೆ. ಕೋಟೆಯ ಎದುರು ಭಾಗದ ಒಂದು ತೋಟದ ಸ್ಥಳಕ್ಕೆ ಕೊಪ್ಪಲುಮಠ ಎಂದು ಈಗ ಕರೆಯುತ್ತಿದ್ದಾರೆ. ಈ ತೋಟವು ಈಗ ಹೊಸದಾಗಿ ನಿರ್ಮಾಣವಾಗಿದೆ. ಇಲ್ಲಿ ಎರಡು ಪುಟ್ಟ ಶಿವಾಲಯಗಳಿವೆ. ಎರಡು ದೇವಾಲಯಗಳೂ ಸ್ವಲ್ಪ ದೂರದಲ್ಲಿವೆ. ಒಂದು ಶಿವಾಲಯದ ಹೊರ ಗೋಡೆಯ ಮೇಲೆ ರಾಜರಾಣಿಯರ ಚಿತ್ರಗಳನ್ನು ಕೆತ್ತಿದ್ದಾರೆ. ಆದರೆ ಇಲ್ಲಿ ಗದ್ದುಗೆಗಳು ಕಂಡು ಬಂದಿಲ್ಲ.

ಇನ್ನೊಂದು ಕೊಪ್ಪಲುಮಠ ಬಿದನೂರಿನಿಂದ ಸು. ಐದು ಕಿ. ಮೀ. ದೂರದ ಕೊಲ್ಲೂರು ರಸ್ತೆಯ ಒಂದು ಪಾರ್ಶ್ವದಲ್ಲಿರುವುದು ತಿಳಿದುಬಂದಿದೆ. ಕೊಪ್ಪಲು ಮಠವು ತುಂಬಾ ವಿಶಾಲವಾಗಿದೆ. ಇದರ ವಿಸ್ತೀರ್ಣ ಸು. ೨೫ ಎಕರೆ ಎಂದು ಇಲ್ಲಿ ವಾಸವಾಗಿರುವ ಶ್ರೀ ಶ್ರೀನಿವಾಸಭಟ್ಟರು ಹೇಳುತ್ತಾರೆ. ಈಗ ಈ ಸ್ಥಳದಲ್ಲಿ ಒಂದು ವಿಶಾಲವಾದ ಕೆರೆ, ತಿಳಿನೀರಿನ ಎರಡು ಕೊಳಗಳು, ಮಠದ ಕಟ್ಟಡದ ಪುಟ್ಟ ತಳಪಾಯ ಮತ್ತು ಬಿದ್ದುಹೋಗಿರುವ ಗೋಡೆಯ ಅವಶೇಷಗಳು ಮಾತ್ರ ಕಂಡು ಬರುತ್ತವೆ. ಬಿದನೂರಿನಲ್ಲಿ ಈವರೆಗೂ ಶೋಧಿಸಿದ ೪೩ ವೀರಶೈವ ಮಠಗಳಲ್ಲಿ ಇದೂ ಸಹ ಸೇರಿಕೊಂಡಿದೆ.

ಕೊಪ್ಪಲುಮಠದ ಹಿಂಭಾಗದ ಸ್ವಲ್ಪ ಎತ್ತರವಾದ ಸ್ಥಳದಲ್ಲಿ ರಾಜರಾಣಿಯರ ಗದ್ದುಗೆಗಳಿವೆ. ಈಗ ಇಲ್ಲಿ ದಟ್ಟವಾದ ಕಾಡು ಬೆಳೆದಿದೆ. ಈ ಸ್ಥಳದ ವಿಸ್ತೀರ್ಣ

* ನಿವೃತ್ತ ಉಪನ್ಯಾಸಕ, ೪ನೆಯ ಅಡ್ಡರಸ್ತೆ, ತಿಲಕ್‌ನಗರ, ಶಿವಮೊಗ್ಗ-೫೭೭ ೨೦೧

ಸು. ೧೦ ಎಕರೆಗಳಷ್ಟಿದೆ. ಇದರ ಸುತ್ತಲೂ ಕಂದಕ ವನ್ನು ನಿರ್ಮಿಸಿದ್ದು ಗೋಡೆಯನ್ನು ಕಟ್ಟಲಾಗಿತ್ತು. ಈಗ ಗೋಡೆಯ ಅವಶೇಷವು ಕಂಡುಬರುತ್ತದೆ. ಇಲ್ಲಿ ೧೦ ಗದ್ದುಗೆಗಳಿವೆ. ಇವುಗಳ ನಡುವೆ ೧೦-೧೫ ಅಡಿ ಅಂತರವಿದೆ. ಇವುಗಳನ್ನು ಸಾಲಾಗಿ ನಿರ್ಮಿಸಲಾಗಿದೆ. ಇವುಗಳನ್ನು ಗ್ರಾನೈಟ್ ಮತ್ತು ಒರಟು ಕಲ್ಲಿನಿಂದ ಕಟ್ಟಲಾಗಿದೆ. ಕಲ್ಲನ್ನು ನಯಗೊಳಿಸಿಲ್ಲ. ಒಂದೇ ಆಕಾರ ಮತ್ತು ಗಾತ್ರವಿಲ್ಲ. ಗಚ್ಚುಗಾರೆಯನ್ನು ಬಳಸ ಲಾಗಿದೆ. ಪ್ರತಿಯೊಂದು ಗದ್ದುಗೆಯೂ ೨೦ ಅಡಿ ಉದ್ದ ಮತ್ತು ೨೦ ಅಡಿ ಅಗಲವಾಗಿದ್ದು, ಆಯತಾ-ಕಾರವಾಗಿದೆ. ಮೇಲುಭಾಗದಲ್ಲಿ ಗೋಪುರವಿದ್ದಿರ ಬಹುದು. ಆದರೆ ಈ ಗದ್ದುಗೆಗಳ ಮೇಲುಭಾಗ ಬಿದ್ದು ಹೋಗಿರುವುದರಿಂದ ಈಗ ಏನೂ ಕಾಣಿಸುವುದಿಲ್ಲ. ಈ ಗದ್ದುಗೆಗಳಲ್ಲಿ ಅಲಂಕೃತವಾದ ಕೆತ್ತನೆಗಳಿಲ್ಲ. ಬಾಹ್ಯ ನೋಟಕ್ಕೆ ಇವು ಆಕರ್ಷಕವಾಗಿಲ್ಲ.

ಪ್ರತಿಯೊಂದು ಗದ್ದುಗೆಯ ಮುಂದೆ ಸಮಾಧಿಸ್ತ ರಾದವರ ಶಿಲ್ಪವನ್ನು ಕೆತ್ತಿದ ಕಲ್ಲನ್ನು ನೆಟ್ಟಿದೆ. ಕಲ್ಲಿನ ಮೇಲುಭಾಗದಲ್ಲಿ ಸೂರ್ಯ ಮತ್ತು ಚಂದ್ರನ ಚಿತ್ರವಿದೆ. ರಾಜ ಅಥವಾ ರಾಣಿಯ ಪಕ್ಕದಲ್ಲಿ ಒಂದು ಸ್ತ್ರೀ ವಿಗ್ರಹ ಇದೆ. ಇದು ಮಹಾಸತಿ ಕಲ್ಲಿನಂತಿದ್ದು ಕೈಯಲ್ಲಿ ನಿಂಬೆ ಹಣ್ಣಿದೆ. ಆದರೆ ನೃತ್ಯಭಂಗಿಯಲ್ಲಿದೆ. ಇವರ ಉಡುಪಿ ನಲ್ಲಿ ಕಾಲಕಾಲಕ್ಕೆ ಬದಲಾವಣೆಯಾಗಿರುವುದನ್ನು ಗಮನಿಸಬಹುದು. ಕ್ರಿ. ಶ. ೧೬೬೧ರಲ್ಲಿ ಮರಣ ಹೊಂದಿದ ಶಿವಪ್ಪನಾಯಕನೊಂದಿಗೆ ಅವನ ಪತ್ನಿ-ಯರಾದ ಲಿಂಗಮ್ಮಾಜಿ ಮತ್ತು ನಾಗಮ್ಮಾಜಿಯರು ಪತಿಯೊಂದಿಗೆ ಜೀವಂತ ಸಮಾಧಿಯಾದರು. ಹಾಗೆಯೇ ೧೬೬೨ರಲ್ಲಿ ಸ್ವರ್ಗಸ್ಥನಾದ ಹಿರಿಯ ವೆಂಕಟಪ್ಪನಾಯಕನ ಪತ್ನಿ ಮಲ್ಲಮ್ಮಾಜಿಯೂ, ಕ್ರಿ. ಶ. ೧೬೬೪ರಲ್ಲಿ ನಿಧನ ಹೊಂದಿದ ಭದ್ರಪ್ಪನಾಯಕನ ಇಬ್ಬರು ಪತ್ನಿಯರೂ ಸಹ ಜೀವಂತ ಸಮಾಧಿಯಾದರು. ಆದರೆ ಹಿರಿಯ ಸೋಮಶೇಖರನಾಯಕನ ಪತ್ನಿ ಚೆನ್ನಮ್ಮಾಜಿಯು ಸಹಗಮನ ಪದ್ಧತಿಯನ್ನು ವಿರೋಧಿಸಿ ಬಹಿಷ್ಕರಿಸಿದಳು, ಇವಳಿಂದ ಮುಂದೆ ಯಾರೂ ಸಹಗಮನ ಮಾಡಲಿಲ್ಲ.

ಕಲ್ಲಿನಲ್ಲಿ ಕೆತ್ತಿರುವ ರಾಜ ಅಥವಾ ರಾಣಿಯರ ಹೆಸರ ನ್ನಾಗಲೀ, ನಿಧನ ಹೊಂದಿದ ಕಾಲವನ್ನಾಗಲೀ ಕೆತ್ತಿಲ್ಲ. ಆದರೂ ಇವರನ್ನು ಗುರುತಿಸುವುದು ಅಷ್ಟೇನೂ ಕಷ್ಟ ವಾಗದು. ಒಂದು ಕ್ರಮದಲ್ಲಿ ಇವುಗಳನ್ನು ಕಟ್ಟಿರು ವುದರಿಂದ ಇದು ಸಾಧ್ಯವಾಗಿದೆ. ಶಿವಪ್ಪನಾಯಕನ ಗದ್ದುಗೆಯು ಮಾತ್ರ ಸಾಲಿನಿಂದ ಸ್ವಲ್ಪ ಮುಂದೆ ಇದೆ. ಹಿರಿಯ ವೆಂಕಟಪ್ಪನಾಯಕ ಎಂದು ಗುರುತಿಸಲಾಗಿರುವ ಗದ್ದುಗೆಯ ಮುಂದೆ ಒಂದು ಪುಟ್ಟ ಮಂಟಪವಿದೆ. ಇವುಗಳಿಗೆ ವಾರ್ಷಿಕ ಪೂಜೆ ನಡೆಯುತ್ತಿತ್ತು ಎಂದು ಪ್ರಚಲಿತವಿದೆ.

ಕೊಪ್ಪಲು ಮಠದಲ್ಲಿ ಶಿವಪ್ಪನಾಯಕ (೧೬೪೬-೧೬೬೧), ವೆಂಕಟಪ್ಪನಾಯಕ (೧೬೬೧-೬೨), ಭದ್ರಪ್ಪನಾಯಕ (೧೬೬೨-೬೪) ಹಿರಿಯ ಸೋಮ ಶೇಖರನಾಯಕ(೧೬೬೪-೭೨), ಚೆನ್ನಮ್ಮಾಜಿ(೧೬೭೨-೧೬೯೭), ಹಿರಿಯ ಬಸಪ್ಪನಾಯಕ(೧೬೯೭-೧೭೧೫), ಇಮ್ಮಡಿ ಸೋಮಶೇಖರನಾಯಕ (೧೭೧೫-೧೭೪೦) ಇಮ್ಮಡಿ ಸೋಮಶೇಖರನಾಯಕನ ಮಲತಾಯಿ ಚನ್ನಮ್ಮಾಜಿ, ಹಿರಿಯ ಬಸಪ್ಪನಾಯಕನ ಚಿಕ್ಕ ಮಗ ವೀರಭದ್ರನಾಯಕ(೧೭೩೩)ಮತ್ತು ಚನ್ನಬಸವನಾಯಕ (೧೭೫೫-೧೭೫೭)ನ ಗದ್ದುಗೆಗಳಿವೆ. ಇವರಲ್ಲಿ ಇಮ್ಮಡಿ ಸೋಮಶೇಖರನಾಯಕನು ಶಿವಮೊಗ್ಗದ ಮಂಡಳಿ ಮಠದಲ್ಲಿ ವೈಶಾಖ ಬಹುಳ ತೃತೀಯ ತಿಥಿಯಲ್ಲಿ ಶಿವೈಕ್ಯ ನಾದನು. ಇವನ ಪಾರ್ಥಿವ ಶರೀರವನ್ನು ಬಿದನೂರಿಗೆ ತಂದು ಇದೇ ಪಂಚಮಿಯ ದಿನ ಗದ್ದುಗೆಯಲ್ಲಿಡ ಲಾಯಿತು.

ಬಿದನೂರಿನಲ್ಲಿ ಆಳಿದ ಕಿರಿಯ ಬಸಪ್ಪನಾಯಕನ (ಸು. ೧೭೪೦-೧೭೫೫) ಗದ್ದುಗೆಯು ಕೊಪ್ಪಲುಮಠ ದಲ್ಲಿಲ್ಲ. ಕೋಟೆಯ ಹಿಂಭಾಗದ ಭದ್ರರಾಜಪುರ ಬಡಾವಣೆಯ ಡಂಬಳ ಮಠದಿಂದ ಸ್ವಲ್ಪ ಅಂತರದಲ್ಲಿದೆ. ಇದು ಈಗ ಪೂರ್ಣವಾಗಿ ಪಾಳಾಗಿದ್ದು ಖಾಸಗಿ ವ್ಯಕ್ತಿ ಯೊಬ್ಬರ ಹಿತ್ತಲಿನಲ್ಲಿ ಸೇರಿ ಹೋಗಿದೆ. ಗದ್ದುಗೆಯ ಮುಂದೆ ನಿಲ್ಲಿಸಿರುವ ಕಲ್ಲಿನ ಮೇಲು ಅಂತಸ್ತಿನಲ್ಲಿ ಕಿರಿಯ ಬಸಪ್ಪನಾಯಕನ ಶಿಲ್ಪವೂ, ಕೆಳ ಅಂತಸ್ತಿನಲ್ಲಿ ಒಬ್ಬ ಸೈನಿಕನ ತಲೆಯ ಮೇಲೆ ಇನ್ನೊಬ್ಬ ಸೈನಿಕನು ನಿಂತು ಪಟ್ಟದ ಕುದುರೆಯನ್ನು ಹಿಡಿದುಕೊಂಡಿರುವ ಚಿತ್ರವಿದೆ. ವೀರಭದ್ರನಾಯಕನ ಗದ್ದುಗೆಯು ಕೌಲೆದುರ್ಗದ ಬಳಿಯ ಕೊಂಡಲೂರಿನಲ್ಲಿಯೂ ಕೊನೆಯ ರಾಣಿ

ವೀರಮ್ಮಾಜಿಯ ಗದ್ದುಗೆಯು ಧಾರವಾಡದ ನರಗುಂದದ ಬಳಿಯಲ್ಲಿದೆ.

ಸಮಾಧಿಗಳಿಗೆ ಸಂಬಂಧಿಸಿದ ಈ ಕೆಳಗಿನ ಅಂಶಗಳಲ್ಲೂ ಇನ್ನಷ್ಟು ಶೋಧನೆ ನಡೆಯಬೇಕಿದೆ.

೧. ರಾಜ ಅಥವಾ ರಾಣಿಯ ಪಕ್ಕದಲ್ಲಿರುವ ಸ್ತ್ರೀ ವಿಗ್ರಹವು ಮಹಾಸತಿಯ ಕಲ್ಲಿನಂತಿರುವ ಕಾರಣವೇನು ? ನೃತ್ಯದ ಭಂಗಿಯಲ್ಲಿ ಏಕೆ ಕೆತ್ತಿದೆ ? ಈ ವಿಗ್ರಹವು ರಾಣಿಯ ವಿಗ್ರಹವಾಗಿರಲಾರದು. ಆದರೂ ಉಡುಪುಗಳೂ, ತಲೆಯ ಮೇಲಿನ ಕಿರೀಟದ ವಿನ್ಯಾಸ ಮತ್ತು ಆಭರಣಗಳು ರಾಣಿಯನ್ನು ಹೋಲುತ್ತವೆ.

೨. ಶಿವಪ್ಪನಾಯಕನದೆಂದು ಗುರುತಿಸಲಾಗಿರುವ ಕಲ್ಲಿನಲ್ಲಿ ರಾಜ ಮತ್ತು ಸ್ತ್ರೀ ವಿಗ್ರಹದ ನಡುವೆ ಕೆತ್ತಿರುವ ಪುಟ್ಟ ಬಾಲಕಿ ಯಾರು ಎಂಬುದು ತಿಳಿಯುವುದಿಲ್ಲ.

೩. ಶಿವಪ್ಪನಾಯಕನ ವಿಗ್ರಹವಿರುವ ಕಲ್ಲಿನ ತಳಭಾಗದಲ್ಲಿ ೧೨ ಕಲಶಗಳಿವೆ. ಚನ್ನಬಸವನಾಯಕನ ವಿಗ್ರಹದ ತಳದಲ್ಲಿ ಆರು ಕಳಶಗಳಿವೆ. ಉಳಿದ ವಿಗ್ರಹಗಳ ತಳದಲ್ಲಿ ಕಲಶಗಳು ಕಾಣಿಸುತ್ತಿಲ್ಲ. ಹೀಗೆ ವ್ಯತ್ಯಾಸವಿರಲು ಕಾರಣವೇನೆಂಬುದನ್ನು ತಿಳಿಯಬೇಕಾಗಿದೆ. ಅಲ್ಲದೆ ಶಿವಪ್ಪನಾಯಕನ ವಿಗ್ರಹವಿರುವ ಕಲ್ಲಿನ ತಳಭಾಗದಲ್ಲಿ ನಂದಿಯ ವಿಗ್ರಹವಿದೆ. ಉಳಿದವುಗಳಲ್ಲಿ ಇದನ್ನು ಕೆತ್ತಿಲ್ಲ.

ಹೀಗೆ ಹಲವಾರು ಅಂಶಗಳು ಕುತೂಹಲಕಾರಿಯಾಗಿದೆ. ಕೊಪ್ಪಲುಮಠದ ಇನ್ನೊಂದು ಭಾಗದಲ್ಲಿ ರಾಜರಾಣಿಯರ ಗದ್ದುಗೆಗಳಿಗಿಂತ ದೂರದಲ್ಲಿ ಕೆಲವು ಸಚಿವರು ಮತ್ತು ದಂಡನಾಯಕರ ಗದ್ದುಗೆಗಳಿವೆ. ಇವುಗಳ ಎದುರಿನಲ್ಲಿಯೂ ಸಮಾಧಿಸ್ಥರಾದವರ ವಿಗ್ರಹವನ್ನು ಕೆತ್ತಿ ನಿಲ್ಲಿಸಲಾಗಿದೆ. ರಾಜಗೌರವದಿಂದ ಸಮಾಧಿ ಮಾಡಿರುವವರ ವಿಗ್ರಹದ ತಳಭಾಗದಲ್ಲಿ ಕಳಶಗಳನ್ನು ಕೆತ್ತಿದೆ.

ಸು. ಎರಡು ಶತಮಾನಗಳಿಂದ ಅಜ್ಞಾತವಾಗಿದ್ದ ಕೊಪ್ಪಲುಮಠದ ಈ ಗದ್ದುಗೆಗಳು ಈಚೆಗೆ ಕಂಡುಬಂದಿರುವುದರಿಂದ ಕೆಳದಿಯ ಇತಿಹಾಸದ ಮೇಲೆ ಹೆಚ್ಚಿನ ಬೆಳಕು ಚೆಲ್ಲಿದಂತಾಗಿದೆ. ಬಿದನೂರಿನಲ್ಲಿ ಆಳಿದ ರಾಜರಾಣಿಯರ ಸಹಜವಾದ ಶಿಲ್ಪಗಳನ್ನು ಇಲ್ಲಿ ನೆಟ್ಟಿರುವ ಕಲ್ಲಿನಲ್ಲಿ ನೋಡಬಹುದು. ಸಾಮಾನ್ಯವಾಗಿ ಅರಸು ಮನೆತನದ ಗದ್ದುಗೆಗಳನ್ನು ಸುಂದರವಾಗಿ ನಿರ್ಮಿಸುವ ಪದ್ಧತಿಯು ರೂಢಿಯಲ್ಲಿದೆ. ಆದರೆ ಇದಕ್ಕೆ ಅಪವಾದವೆಂಬಂತೆ ಇಲ್ಲಿರುವ ಗದ್ದುಗೆಗಳು ತೀರಾ ಸಾಮಾನ್ಯವಾಗಿವೆ. ಅಲ್ಲದೆ ನಿರೀಕ್ಷಿಸಿದಷ್ಟು ಸುಭದ್ರವಾಗಿಲ್ಲ. ಇದಕ್ಕೆ ಕಾರಣವೇನೆಂಬುದು ತಿಳಿಯುವುದಿಲ್ಲ. ವೀರಶೈವರಾದ ಕೆಳದಿ ಅರಸು ಮನೆತನದಲ್ಲಿ ಸಹಗಮನ ಪದ್ಧತಿಯು ಇನ್ನೂ ರೂಢಿಯಲ್ಲಿದ್ದುದು ಆಶ್ಚರ್ಯವೆನ್ನಬಹುದು.

ಗದ್ದುಗೆಗಳು ಈಗ ಪಾಳಾಗಿ ಬಿದ್ದುಹೋಗುತ್ತಿವೆ. ಮೇಲುಭಾಗದ ಕಲ್ಲುಗಳು ಕಳಚಿ ರಾಶಿಯಾಗಿ ಬಿದ್ದಿವೆ. ಇದನ್ನೂ ಈಗಾಗಲೇ ಕಳ್ಳತನದಿಂದ ಸಾಗಿಸಲಾಗುತ್ತಿದೆ. ಇವುಗಳಿಗೆ ಯಾವ ರಕ್ಷಣೆಯೂ ಇಲ್ಲ. ಈಗಾಗಲೇ ಕಿರಿಯ ಬಸವನಾಯಕನ ಗದ್ದುಗೆಯು ಹೇಳಹೆಸರಿಲ್ಲದಂತಾಗಿರುವುದು ದೊಡ್ಡ ದುರಂತ.

## ಆಧಾರ ಗ್ರಂಥಗಳು

೧. ಕೆಳದಿ ನೃಪವಿಜಯ : ಸಂ.ಕೆ. ಗುಂಡಾಜೋಯ್ಸ್
೨. " " : ಸಂ. ಶಾಮಾಶಾಸ್ತ್ರಿ
೩. ಸಹಜಿ : ಶ್ರೀಧರ ತೇಲ್ಕರ್
೪. ಬಿದನೂರ ಸಿರಿ : ಶ್ರೀ ಶಂಕರನಾರಾಯಣರಾವ್, ನಗರ
೫. ಕನ್ನಡ–ಕನ್ನಡ–ಇಂಗ್ಲಿಷ್ ನಿಘಂಟು : ಐ.ಬಿ.ಎಚ್. ಪ್ರಕಾಶನ ಬೆಂಗಳೂರು